ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಅಂಗವಿಕಲರ ಪಿಂಚಣಿ ನೀಡುವು ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

860 (954) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪ್ರತಿ ವರ್ಷ ಡಿಸೆಂಬರ್-3 ರಂದು ಅಂಗವಿಕಲರ ದಿನಾಚರಣೆಯನ್ನು ಸರ್ಕಾರ ಆಚರಿಸುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ;

(ಆ) ಹಾಗಿದ್ದಲ್ಲಿ, ಅಂಗವಿಕಲರಿಗಾಗಿ ಅನೇಕ ಸವಲತ್ತುಗಳನ್ನು ಪಡೆಯಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೆ; ಬಂದಿದ್ದಲ್ಲಿ, ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು)

(ಇ) ಅಂಗವಿಕಲರ ಮಾಸಿಕ ಪಿಂಚಣಿ ಪಡೆಯಲು ಪೋಷಕರ ವಾರ್ಷಿಕ ವರಮಾನ ರೂ. 11,500ಕ್ಕೆ ನಿಗಧಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಮತ್ತು ಇದು ಇಂದಿನ ಕಾಲಕ್ಕೆ ಪ್ರಸ್ತುತವೋ ಎಂದು ಪರಿಶೀಲಿಸುವ ಗೋಜಿಗೆ ಹೋಗದ ಸರ್ಕಾರ ಅಂಗವಿಕಲರ ನೆರವಿಗೆ ರೂಪಿಸಿರುವ ಕಾರ್ಯಕ್ರಮಗಳು ಯಾವುವು;

(ಈ) ಪೋಷಕರ ವರಮಾನ ಮಿತಿ ಏರಿಕೆಯಾಗದೆ ಯಾವ ಸವಲತ್ತು ಫಲ ಪಡೆಯಲು ಅಂಗವಿಕಲರಿಗೆ ಸಾಧ್ಯವಾಗುವುದಿಲ್ಲವಾದ್ದರಿಂದ ಸರ್ಕಾರ ಈ ಬಗ್ಗೆ ತಕ್ಷಣವೇ ಕ್ರಮ ತೆಗೆದುಕೊಳ್ಳುವುದೇ;

(ಉ) ಅಂಗವಿಕಲರಿಗೆ ಅಂಗವಿಕಲತೆಯಲ್ಲಿ ಶೇಕಡಾವಾರು ನಿಗಧಿ ಮಾಡಿ, ನೀಡುತ್ತಿರುವ ಮಾಸಿಕ ಪಿಂಚಣಿಯಲ್ಲಿ ತಾರತಮ್ಯ ತೋರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೆ ; (ವಿವರ ನೀಡುವುದು)

(ಊ) ಅಂಗವಿಕಲರು ಅಂಗವಿಕಲರಾಗಿಯೇ ಇರುವುದರಿಂದ ಇವರ ಬಗ್ಗೆ ಸರ್ಕಾರ ಮಾನವೀಯತೆ ಮೆರೆದು, ಅನುಕಂಪ/ದಯೆ /ಸಹಾನುಭೂತಿ ವ್ಯಕ್ತಪಡಿಸಿ ಅಂಗವಿಕಲತೆಯಲ್ಲಿ ಶೇಕಡಾವಾರು ತೆಗೆದುಹಾಕಿ ಎಲ್ಲಾ ಅಂಗವಿಕಲರಿಗೆ ಒಂದೇ ರೀತಿ ಮಾಸಿಕ ಪಿಂಚಣಿ ನೀಡಲು ಸರ್ಕಾರ ಕ್ರಮ ತೆಗೆದುಕೊಳ್ಳುವುದೇ? (ವಿವರ ನೀಡುವುದು)